ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ಕೃಷಿ ವಿಮಾ ಯೋಜನೆಯ ಬಗ್ಗೆ

ಶ್ರೀ ಕಾಂತರಾಜು (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

259 (386) ಮಾನ್ಯ ಕೃಷಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಷ್ಟ್ರೀಯ ಕೃಷಿ ವಿಮಾ ಯೋಜನೆ ಅಂದರೇನು ; ಇದನ್ನು ರಾಜ್ಯದಲ್ಲಿ ಯಾವಾಗಿನಿಂದ ಯಾರ ಸಹಯೋಗದೊಂದಿಗೆ ಜಾರಿಗೆ ತರಲಾಗಿದೆ ; ಇದರ ವ್ಯಾಪ್ತಿಯಲ್ಲಿ ಬರುವ ಬೆಳೆಗಳಾವುವು ; (ಜಿಲ್ಲಾವಾರು ವಿವರವಾದ ಮಾಹಿತಿ ನೀಡುವುದು)

(ಆ) 2018-19ರಿಂದ 2020-21 ವರ್ಷಗಳಲ್ಲಿ ಎಷ್ಟು ರೈತರು ಕೃಷಿ ವಿಮಾಯೋಜನೆಯಲ್ಲಿ ನೊಂದಾಯಿಸಿಕೊಂಡಿದ್ದಾರೆ ; ಇವರು ವಿಮಾ ಕಂಪನಿಗೆ ಪಾವತಿಸಿರುವ ಹಣ ಎಷ್ಟು ; ರೈತರು ಈ ವಿಮೆಯಿಂದ ಪಡೆದ ಹಣ ಎಷ್ಟು ; (ಜಿಲ್ಲಾವಾರು ಮಾಹಿತಿ ನೀಡುವುದು)

(ಇ) ಕಳೆದ 3 ವರ್ಷಗಳಲ್ಲಿ ತುಮಕೂರು ಜಿಲ್ಲೆಯ ಗುಬ್ಬಿ ಹಾಗೂ ತುರುವೇಕೆರೆ ತಾಲ್ಲೂಕಿನ ಎಷ್ಟು ರೈತರು ಕೃಷಿ ವಿಮಾ ಯೋಜನೆಯಲ್ಲಿ ನೊಂದಾಯಿಸಿಕೊಂಡಿದ್ದಾರೆ ; ಇವರು ವಿಮಾ ಕಂಪನಿಗೆ ಪಾವತಿಸಿರುವ ಹಣ ಎಷ್ಟು ; ಈ ವಿಮೆಯಿಂದ ಎಷ್ಟು ಜನ ರೈತರಿಗೆ ಹಣ ಬಂದಿದೆ ? (ರೈತರ ಹೆಸರು, ವಿಳಾಸದೊಂದಿಗೆ ಹೋಬಳಿವಾರು ಮಾಹಿತಿ ನೀಡುವುದು)